**134**

ಉತ್ತರ ಕನ್ನಡ ಜಿಲ್ಲೆಯ

# ಯಕ್ಷಗಾನ ಮಂಡಲಿಗಳು


ಲೇಖಕರು:

ಶ್ರೀ। ಮಂಜುನಾಥ ಭಾಗವತ,

ಕನ್ನಡಜಾಣ, ಕಡತೋಕಾ.



**1957.**






ಒಂದಾಣೆ ಮಾಲೆ

# ಉತ್ತರ ಕನ್ನಡ ಜಿಲ್ಲೆಯ
# ಯಕ್ಷಗಾನ ಮಂಡಲಿಗಳು



ಯಕ್ಷಗಾನವು ನಮ್ಮ ಕನ್ನಡಿಗರ ವಿಶಿಷ್ಟ ಕಲೆ. ವಿಶೇಷವಾಗಿ ದಕ್ಷಿಣೋತ್ತರ ಕನ್ನಡ ಜಿಲ್ಲೆಗಳಲ್ಲೂ, ಶಿವಮೊಗ್ಗಾ ಜಿಲ್ಲೆಯ ಉತ್ತರ, ಪಶ್ಚಿಮ ಭಾಗಗಳಲ್ಲೂ ಇದರ ವ್ಯಾಪ್ತಿ ಹೆಚ್ಚು. ಇಲ್ಲಿಯ ಜನಪದದೊಂದಿಗೆ ಓತಪ್ರೋತವಾಗಿ ಹೊಂದಿಕೊಂಡ ಈ ಕಲೆಯು ಇಲ್ಲಿಯ ಜನಮನಗಳಿಗೆ ಉತ್ತಮ ಸಂಸ್ಕಾರ ಕೊಡುವದಾಗಿದೆ.

ಇತ್ತಿತ್ತಲಾಗಿ ಅಂದರೆ ೧೦—೮ ವರ್ಷಗಳ ಈಚೆಗೆ ಈ ಯಕ್ಷಗಾನ ತನ್ನ ಸೌಂದರ್ಯ, ಪ್ರೌಢಿಮೆಗಳಿಂದ ಸೀಮೋಲ್ಲಂಘನ ಮಾಡತೊಡಗಿದೆ. ದಕ್ಷಿಣ ಕನ್ನಡದ ಮಂಜುನಾಥ ಭಾಗವತರೆಂಬವರೊಬ್ಬರು ಕೊಡಗಿನ ಸಂಸ್ಥಾನಿಕರ ಮನ್ನಣೆಯನ್ನು ಪಡೆದದ್ದೂ, ಉತ್ತರ ಕನ್ನಡದ ಕರ್ಕಿ ಮೇಳದವರು ಸಾಂಗಲಿ, ಬಡೋದಾ ಸಂಸ್ಥಾನಿಕರ ಗೌರವಕ್ಕೆ ಪಾತ್ರರಾದದ್ದು ಮಾತ್ರ ಶತಮಾನದ ಹಿಂದಿನ ಮಾತೇ ಹೊರತು ಅದಕ್ಕೂ ಇತ್ತಲಾಗಿ ಯಕ್ಷಗಾನದ ಬಗೆಗೆ ಯಾವ ಒಳ್ಳೆಯ, ಹೆಮ್ಮೆಯ ಮತ್ತು ಅಭಿಮಾನದ ಸಮಾಚಾರ ಕೇಳಿದ್ದಿಲ್ಲವಾಗಿತ್ತು; ನಮ್ಮ ಸುದೈವದಿಂದ ಭಾರತದ ರಾಜಧಾನಿಯಲ್ಲೂ, ಮುಂಬೈ, ಬೆಂಗಳೂರು, ಮೈಸೂರು ಮುಂತಾದ ಕಡೆಗಳಲ್ಲೂ ಈ ಕಲೆಯು ರಾಷ್ಟ್ರೀಯ ಗೌರವ ಪಡೆದು, ರಶಿಯನ್ ನಾಯಕರನ್ನು ಮೆಚ್ಚಿಸಿ, ಅವರ ಪ್ರೀತಿಪಾತ್ರವಾಗಿ, ವರ್ಷಕ್ಕೊಂದೆರಡು ಸಲವಾದರೂ ಧಾರವಾಡ, ಬೆಂಗಳೂರು ಬಾನುಲಿಗಳಿಂದ ಬಿತ್ತರಿಸಲ್ಪಡುತ್ತಿದೆಯೆಂದರೆ ಯಕ್ಷಗಾನ ಕಲಾಪ್ರೌಢಿಮೆ ಹಿರಿಯದೆಂದೇ ಅರ್ಥ. ಇದಕ್ಕೆಲ್ಲ ಕಾರಣರು ನಮ್ಮ ಜಿಲ್ಲೆಗಳಲ್ಲಿರುವ ಯಕ್ಷಗಾನ ಮಂಡಳಿಗಳು, ಕಲಾವಿದರು. ಉ. ಕನ್ನಡ ಜಿಲ್ಲೆಯೂ ಯಥಾನುಶಕ್ತಿ ತನ್ನ ಸೇವೆಯನ್ನು ಯಕ್ಷಗಾನ ಕಲಾಂಬೆಗೆ ಸಲ್ಲಿಸಿದೆ. ಅದರ ಸ್ಥೂಲ ಪರಿಚಯವಾದರೂ

ಕನ್ನಡಿಗರಿಗಾಗಲೆಂಬ ಉದ್ದೇಶದಿಂದ ಆಲ್ಲಿಯ ಮೇಳಗಳ ಕುರಿತು ಬರೆಯುತ್ತಿರುವೆನು.

ಶ್ರೀ ದುರ್ಗಾಂಬಾ ಪ್ರಸಾದಿಕ ಯಕ್ಷಗಾನ ಮಂಡಳಿ, ಕರ್ಕಿ, (ಹೊನ್ನಾವರ):— ಈ ಮೇಳಕ್ಕೆ ಹಾಸ್ಯಗಾರ ಮಂಡಳಿಯೆನ್ನುವದೂ ಇದೆ. ಇದರ ಸಂಸ್ಥಾಪಕರಾದ ಶ್ರೀ। ಪರಮಯ್ಯ ಹಾಸ್ಯಗಾರರ ಮನೆತನದವರು. ಬಡೋದಾ, ಸಾಂಗ್ಲಿಗಳಿಗೆ ಹೋಗಿ ಬರುತ್ತಿದ್ದರಂತೆ. ಕೆಸಗಾಲಿ ಮಂಜಪ್ಪ, ಕೆಂಬೂತನ ಕುಪ್ಪಯ್ಯ, ಮಂಜಪ್ಪ ಭಾಗವತ, ಮಣಿಗಾರ ಭಾಗವತರ ಕಾಲದ ವರೆಗೂ ಆ ಕಡೆಗೆ ವರ್ಷಕ್ಕೊಮ್ಮೆ ಹೋಗಿಬರುತ್ತಿದ್ದರಂತೆ. ಸಾಂಗ್ಲಿ ಸಂಸ್ಥಾನಿಕರು ಇವರ ಆಟವನ್ನು ಕಂಡೇ ಮರಾಠಿಯಲ್ಲೂ ನಾಟಕ ಬರೆಯಲು ಪ್ರೋತ್ಸಾಹಿಸಿದರೆಂತ ಮರಾಠೀ ಸಾಹಿತ್ಯಕಾರರ ಹೇಳಿಕೆಯುಂಟು. ಪರಮಯ್ಯ ಹಾಸ್ಯಗಾರರು, ಹೆಸರೇ ಹೇಳುವಂತೆ, ಎಷ್ಟೋ ತಲೆಮಾರುಗಳಿಂದ ಕರ್ಕಿ ಮೇಳಕ್ಕೆ ಹಾಸ್ಯಗಾರರು. ಶಬರ, ವಿದೂಷಕ, ಬಣ್ಣಗಾರಿಕೆ ಇವರ ಸೊತ್ತೆಂಬಷ್ಟು ಚೆನ್ನಾಗಿದೆ. ತಮ್ಮ ೧೩ನೆಯ ವಯಸ್ಸಿಗೇ ಯಕ್ಷಗಾನರಂಗಕ್ಕಿಳಿದ ಪರಮಯ್ಯನವರು ೧೫ ವರ್ಷಗಳ ಹಿಂದೆ ತಮ್ಮ ಮಕ್ಕಳು ಮೊಮ್ಮಕ್ಕಳನ್ನು ಕೂಡಿಕೊಂಡು ಮೇಳವನ್ನು ಸ್ಥಾಪಿಸಿದ್ದಾರೆ. ಈಗ ಇವರಿಗೆ ೭೩ನೇ ವರ್ಷ. ಮಕ್ಕಳು ಮೊಮ್ಮಕ್ಕಳೆಲ್ಲಾ ಸುಶಿಕ್ಷಿತರು, ಸುಸಂಸ್ಕೃತರು; ಆರೋಗ್ಯವಂತರು. ಮೊಮ್ಮಕ್ಕಳು— ಪರಮಯ್ಯ ಸತ್ಯನಾರಾಯಣ ಎಂಬವರು ಬಿ. ಎ. ಪದವೀಧರರು. ಮಕ್ಕಳು ಹಾಯ್‌ಸ್ಕೂಲು, ಶಾಲೆಗಳಲ್ಲಿ ಶಿಕ್ಷಕರು. ಕಿರಿಯ ಮಗ ನಾರಾಯಣ ಮತ್ತು ಮೊಮ್ಮಗ ಪರಮಯ್ಯ ಇವರ ಶಬರಾರ್ಜುನ, ಸುಧನ್ವಾರ್ಜುನ, ಬಭ್ರುವಾಹನಾರ್ಜುನ, ಇಂದ್ರಜಿತು-ಲಕ್ಷ್ಮಣ, ಬಲರಾಮ-ಕೃಷ್ಣ, ಕುಶ-ಲವ, ಬೃಹನ್ನಳೆ-ಉತ್ತರ ಮುಂತಾದ ಜೊತೆ ಪಾತ್ರಗಳು ಉ. ಕ. ಜಿಲ್ಲೆಯ ಯಕ್ಷಗಾನರಂಗದಲ್ಲಿ ಅಪೂರ್ವವಾದವುಗಳಾಗಿವೆ. ಶಬರ—ತೆರೆಯಿಂದ ಹೊರಗೆ ಬರುವ ಧೃತಿ, "ಯನಲು ನಗುತಲಭವ........" "ಬಡವನಾಗು ಭಟನೆಂಬಾಗು ........" "ಫಡ ಕಿರಾತ....—" "ಮರುಳು ವ್ಯಾಧ........" ಎಂಬ ಪದ್ಯಗಳಲ್ಲಿ ಮಾಡುವ ಅವರಿಬ್ಬರ ಅಭಿನಯ, ಕುಣಿತ, ರಭಸ, ಅನುಪಮವಾಗಿವೆ. ಅವರಿಬ್ಬರು ಮಾಡಿಕೊಳ್ಳುವ ಬಾಣ, ಬಿಲ್ಲು, ಕಲ್ಲು, ಗಿಡ ಮತ್ತು ಮುಷ್ಟಿಯುದ್ಧಗಳ ಬಗೆಬಗೆಯ ಕುಣಿತ, ಆವೇಶಗಳು ಪ್ರೇಕ್ಷಕ

ರನ್ನು ಭಾವಸಮಾಧಿಗೊಯ್ಯುಬಿಡುತ್ತವೆ. ಹೀಗೆಯೇ ಇತರ ಎಲ್ಲ ಜೋಡಿಗಳಲ್ಲಿ ಹೆಚ್ಚೂ ಅಲ್ಲದ, ಕಡಿಮೆಯೂ ಅಲ್ಲದ ಹದವಾದ ರಸ, ಸನ್ನಿವೇಶ, ಪಾತ್ರಪೋಷಣೆಗೆ ತಕ್ಕುದಾದ ಭಾವಪೂರ್ಣ ಮಾತುಗಳು. ಕೆರೆಮನೆ ಶಿವರಾಮ ಹೆಗಡೆಯವರ ಎಡಬಲಗಳಲ್ಲಿ ಇಂದು ನಿಲ್ಲಲು ಸಮರ್ಥರಾಗಿರುವ ನಟರು ಇವರೇ ಎನ್ನಬಹುದು.

ಕೃಷ್ಣ ಹಾಸ್ಯಗಾರರು ಬಣ್ಣಗಾರಿಕೆಯಲ್ಲಿ ವಿಶೇಷ ಪಳಗಿದವರು ಸೈಂಟ್ ಥಾಮಸ್ ಹೈಸ್ಕೂಲಿನಲ್ಲಿ ಡ್ರಾಯಿಂಗ ಮಾಸ್ತರರು. ಬಕಾಸುರ, ಶೂರ್ಪನಖಿ, ಕಿರ್ಮೀರ, ಘೋರಭೀಷಣ, ನರಸಿಂಹ ಮುಂತಾದ ರಾಕ್ಷಸ ಪಾತ್ರಗಳಲ್ಲಿ ಇವರನ್ನು ಮೀರಿಸುವವರು ಯಾರೂ ಇಲ್ಲ. ಯಕ್ಷಗಾನ ರಂಗಕ್ಕೆ ಹೊಸದಾಗಿ, ಪ್ರಥಮವಾಗಿ ತಂದ "ಪ್ರೇತ ನಾಟ್ಯ" ಇವರದು. ಸಿಂಹ ನಾಟ್ಯದಲ್ಲಿ ಧಾರೇಶ್ವರ ಸುಬ್ಬನನ್ನೂ ಮೀರಿ ನಿಂತಿದ್ದಾರೆ. ಭೂಕೈಲಾಸದ ವೃದ್ಧವಿಪ್ರ, ಗಣಪತಿ ಮುಂತಾದ ಹಾಸ್ಯ ಪಾತ್ರಗಳಲ್ಲೂ ಹೆಸರಾಗಿದ್ದಾರೆ.

ಪುಟ್ಟ ಹಾಸ್ಯಗಾರರು ಮೋಹಿನಿ, ಮಾಯಾ ಶೂರ್ಪನಖಿ, ಮಾಯಾ ಹಿಡಿಂಬೆ, ಸೀತೆ ಮೊದಲಾದ ಶೃಂಗಾರ-ದುಃಖರಸ ಪ್ರಧಾನ ಪಾತ್ರಗಳಿಗೇ ಮೀಸಲಾದವರು. ಸುಕುಮಾರ ದೇಹ, ಸುಂದರ, ಸಣ್ಣ ನಿಲುವು. ನಾರದ, ಕೃಷ್ಣ ಮುಂತಾದ ಲಲಿತ ಪಾತ್ರಗಳನ್ನು ನಿರ್ವಹಿಸುತ್ತಾರೆ.

ಪರಮಯ್ಯ ಹಾಸ್ಯಗಾರರಷ್ಟು ಈ ರಂಗದಲ್ಲಿ ಸೇವೆಸಲ್ಲಿಸಿದವರು ಉತ್ತರ ಕನ್ನಡದಲ್ಲಿ ಬಹುಶಃ ಯಾರೂ ಇಲ್ಲ. ಅವರ ಶಬರಿ, ಕೀಚಕ, ಭಸ್ಮಾಸುರ, ವಿಭೀಷಣ ಪಾತ್ರಗಳು ಅತಿ ಖ್ಯಾತಿಗೊಂಡಿದ್ದುವು. ಸ್ವಲ್ಪ ಹಳೆಯ ಸಂಪ್ರದಾಯದವರು.

ವರದು ಹಾಸ್ಯಗಾರರು ಆಕೃತಿಗೆ ತಕ್ಕಂತೆ ಭೀಮ, ರಾವಣ, ಬಂಡೀಭೀಮ, ವಲಲಭೀಮ ಮುಂತಾದ ಗಡಸು ಪಾತ್ರಗಳಿಗೂ, ರಾಮ, ನಾರದ ಮುಂತಾದ ಪಾತ್ರಗಳಿಗೂ ಹೆಸರಾಗಿದ್ದಾರೆ. ಕುಣಿತ ಕಡಿಮೆಯಾದರೂ ಮಾತು, ವೇಷ, ಧ್ವನಿ, ಹಾವಭಾವಗಳಿಂದಲೇ ತುಂಬಿಕೊಂಡು ರಂಜಿಸುವುದರಲ್ಲಿ ಹೆಸರಾದವರು. ಇವರ ಎರಡನೇ ಮಗ ಸತ್ಯನಾರಾಯಣ ಹಾಸ್ಯಗಾರರೂ, ಆದಿನಾರಾಯಣ, ಯೋಗಿನಿ, ಹನುಮಂತ ಮೊದಲಾದ ಪಾತ್ರಗಳ ಉತ್ತಮಾಭಿನಯದಿಂದ ಹೆಸರು ಗಳಿಸಿದ್ದಾರೆ. ಉತ್ತಮ ಮೃದಂಗ

ವಾದಕರೂ ಹೌದು. ಹೊಸಕೇರಿ ಕೃಷ್ಣ ಹೆಗಡೆ, ಕಡತೋಕೆ ಲಕ್ಷ್ಮೀನಾರಾಯಣ ಭಾಗವತರೂ ಇತ್ತಲಾಗಿ ಸೇರಿಕೊಂಡ ನಟರು. ಇವರಿಗೂ ಉಜ್ವಲ ಭವಿಷ್ಯವಿದೆ. ಒಂದು ಕಾಲಕ್ಕೆ ಜಿಲ್ಲೆಯಲ್ಲೇ ಖ್ಯಾತಿಪಡೆದ ಭಾಗವತರಾದ ಕಡತೋಕೆ ಶಂಭು ಭಾಗವತರ ಮಕ್ಕಳೇ ಈ ಮೇಳಕ್ಕೆ ೬-೮ ವರ್ಷಗಳಿಂದ ಭಾಗವತರಾಗಿದ್ದಾರೆ. ಕರ್ಕಿಯ ಕೇಶವ ಭಂಡಾರಿ ಮತ್ತು ಸೋದರರು ಹಿಮ್ಮೇಳದಲ್ಲಿದ್ದಾರೆ. ಉತ್ತಮ ವಾದನಗಾರರಿದ್ದಾರೆ.

ಈ ಮೇಳದವರು ೧೯೫೮ನೆಯ ಎಪ್ರಿಲದಲ್ಲಿ ಜರಗಿದ "ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ ಉತ್ಸವ"ದಲ್ಲಿ ಭಾಗವಹಿಸಲು ಯಕ್ಷಗಾನ ಕಲಾ ಮಂಡಳದಿಂದ ಕಳಿಸಲ್ಪಟ್ಟಿದ್ದರು. ಪ್ರೊಫೆಸರ ಕೆ. ಜಿ. ಶಾಸ್ತ್ರಿ, ಎಂ. ಎ. ಕುಮಟಾ ಅವರ ಧುರೀಣತೆಯಲ್ಲಿ ಡಿಲ್ಲಿಗೆ ಹೋದ ಇವರು ೧೫ ಮಿನಿಟುಗಳಲ್ಲಿ "ಭರತ–ಧರ್ಮಾಂಗಧ" ಮತ್ತು ೪೦ ಮಿನಿಟುಗಳಲ್ಲಿ "ಸುಧನ್ವಾರ್ಜುನ" ಎಂಬ ಎರಡು ಯಕ್ಷಗಾನ ನಾಟಕಗಳನ್ನೂ ಒಂದು ಪ್ರೇತ ನಾಟ್ಯವನ್ನೂ ಮಾಡಿ ಅಲ್ಲಿಯ ಜನತೆಗೆ ರಸದೂಟವಿಕ್ಕಿದರು. ಅಲ್ಲಿಯ "ಹಿಂದುಸ್ತಾನ್ ಟಾಯಿಮ್ಸ್" ಮತ್ತು "ಸ್ಟೇಟ್ಸ್‌ಮನ್" ಎಂಬೆರಡು ಇಂಗ್ಲಿಷ್ ಪತ್ರಿಕೆಗಳಲ್ಲಿ ಯಕ್ಷಗಾನದ ಮಹತಿ, ಹಿರಿಮೆಗಳ ಬಗೆಗೆ ದೊಡ್ಡ ಲೇಖಗಳೇ ಬಂದಿದ್ದವು. ಪ್ರಧಾನ ಮಂತ್ರಿ ನೆಹರೂರವರ ಮನೆಯಲ್ಲಿ "ಕೃಷ್ಣಾರ್ಜುನ" ಎಂಬ ಕಾರ್ಯಕ್ರಮ ಜರಗಿತು. ಆ ಸಮಯ ಕರ್ಣಾಟಕದ ಶ್ರೀ। ವಿ. ಕೃ. ಗೋಕಾಕ, ಶ್ರೀ। ಎ. ಎನ್. ಮೂರ್ತಿರಾವ್, ಡಾ। ಹರ್ಡೀಕರ, ಶ್ರೀ। ಎಸ್. ವಿ. ಕೃಷ್ಣಮೂರ್ತಿರಾವ್ ಮೊದಲಾದವರೂ, ಉಪರಾಷ್ಟ್ರಪತಿ ಡಾ। ರಾಧಾಕೃಷ್ಣನ್, ಶ್ರೀ। ಕೃಷ್ಣಮೆನನ್, ಶ್ರೀಮತಿ ಇಂದಿರಾ ಗಾಂಧಿ ಮೊದಲಾದವರೂ, ಸಂಸ್ಕೃತಿ ಉತ್ಸವದ ಮೊದಲನೆಯ ದಿನದಂದು ರಾಷ್ಟ್ರಪತಿ ಡಾ। ರಾಜೇಂದ್ರ ಪ್ರಸಾದರೂ ಎಷ್ಟೋ ವಿದೇಶಿಯರೂ ಈ ಕಲೆಯನ್ನು ತುಂಬ ಮೆಚ್ಚಿಕೊಂಡರು. ಹಿರಿಮೆಗೆ ಹಿಗ್ಗಿದರು. ನಾಲ್ಕನೆಯ ದಿನ ಈಗಿನ ನಮ್ಮ ಮೈಸೂರಿನ ಮುಖ್ಯಮಂತ್ರಿಗಳಾದ ಮಾನ್ಯ ನಿಜಲಿಂಗಪ್ಪನವರೇ ಅಧ್ಯಕ್ಷರಾಗಿದ್ದು ಕಾರ್ಯಕ್ರಮವನ್ನು ಕಂಡು ಸಂತೋಷಪಟ್ಟಿರುವರು

ಕಳೆದ ವರ್ಷ ಮುಂಬಯಿ ರಾಜ್ಯದ ದ್ವಿತೀಯ ನಾಟ್ಯ ಮಹೋತ್ಸವದಲ್ಲಿ ವಿಜಯಿಗಳಾಗಿ ಬಹುಮಾನ ಪಡೆದುದಲ್ಲದೆ, ಪ್ರದೇಶ ಸ್ಪರ್ಧೆಯಲ್ಲಿ ಶ್ರೀ। ಪರಮಯ್ಯ, ಬಿ. ಎ., ಅವರ ಸುಧನ್ವನು ವೈಯಕ್ತಿಕ ಗೌರವಪಡೆದನು.

ಬೆಳ್ಳಿಯ ಶೀಲ್ಡನ್ನು ಈ ವರ್ಷ ಆ ಬಗೆಗೆ ಮುಂಬಯಿ ಸರಕಾರದವರು ಕೊಟ್ಟಿದ್ದಾರೆ. ಧಾರವಾಡ ಬಾನುಲಿ ಕೇಂದ್ರದಿಂದ 1954ನೇ ಜೂನದಲ್ಲೂ, 1956ನೇ ಎಪ್ರಿಲದಲ್ಲೂ ಕ್ರಮವಾಗಿ ೧೫ ನಿಮಿಷ ಮತ್ತು ೧ ತಾಸು ೪೦ ನಿಮಿಷಗಳ ಯಕ್ಷಗಾನ ಪ್ರಸಾರವಾಗಿದೆ. ಸಾಹಿತ್ಯ ಸಮ್ಮೇಲನ, ಯಕ್ಷಗಾನ ಗೋಷ್ಠಿ, ಯಕ್ಷಗಾನ ಸಮ್ಮೇಲನಗಳಲ್ಲೆಲ್ಲಾ ಭಾಗವಹಿಸಿದ್ದಾರೆ. ಕುಮಟೆಯ ಕೆನರಾ ಕೊಲೇಜಿನಲ್ಲಿ ೭-೮ ವರ್ಷಗಳ ಹಿಂದೆ ಆಗ ಮುಂಬಯಿ ರಾಜ್ಯದ ಮುಖ್ಯಮಂತ್ರಿಗಳಾಗಿದ್ದ ಶ್ರೀ। ಬಿ. ಜಿ ಖೇರರೂ, ೨ ವರ್ಷಗಳ ಹಿಂದೆ ಶಿಕ್ಷಣಮಂತ್ರಿಗಳಾಗಿದ್ದ ಶ್ರೀ। ದಿನಕರರಾವ್ ದೇಸಾಯಿಯವರೂ ಈ ಮೇಳದ ಯಕ್ಷಗಾನ ಆಟವನ್ನು ಕಂಡು ಆನಂದಪಟ್ಟು ಹೋಗಿದ್ದಾರೆ. ಈ ಸೀಮೆಯ ಎಲ್ಲ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿಯೂ ಕರ್ಕಿ ಮೇಳದವರ ಅಂಗವಿದ್ದೇ ಇರುತ್ತದೆ. ನಾಟ್ಯವಿಲಾಸಿಗಳವರು, ನಾಟ್ಯೋಪಜೀವಿಗಳಲ್ಲ. ಸಂಪ್ರದಾಯ ಕಾದುಕೊಂಡು ಸುಧಾರಣೆ ಮಾಡಬೇಕೆಂಬವರು.

೦ ೦ ೦ ೦ ೦

ಶ್ರೀ। ಇಡಗುಂಜಿ ಮಹಾಗಣಪತಿ ಪ್ರಾಸಾದಿಕ ಯಕ್ಷಗಾನ ಮಂಡಳಿ. (ಹೊನ್ನಾವರ):— ಕೆರೆಮನೆ ಶಿವರಾಮ ಹೆಗ್ಗಡೆಯವರೇ ಇದಕ್ಕೆ ಮುಖ್ಯಸ್ಥರಾದುದರಿಂದ ಕೆರೆಮನೆ ಮೇಳವೆಂದೂ ಹೇಳುತ್ತಾರೆ. ಹೆಗಡೆಯವರೇ ಈ ಮೇಳವನ್ನು ಸ್ಥಾಪಿಸಿ ೧೮-೨೦ ವರ್ಷಗಳಾದವು. ಯಾಜ ಭಾಗವತರು, ಕನ್ನಯ್ಯ ಭಂಡಾರಿ, ಕೆರೆಮನೆ ಮಾಬ್ಲ ಹೆಗಡೆ, ಶಿವರಾಮ ಹೆಗಡೆಯವರು, ಧಾರೇಶ್ವರ ಸುಬ್ಬ ಇವರು ಖಾಯಂ ಕಲಾವಿದರು. ಪ್ರತಿ ವರುಷವೂ, ಮಂಡಳಿಗೆ ಹೊಸ ಹೊಸ ರೂಪಕೊಟ್ಟು ಜನರನ್ನು ಆಕರ್ಷಿಸಿ ಥ್ಯೇಟರು ತುಂಬಿಸುವದರಲ್ಲಿ ಶಿವರಾಮ ಹೆಗ್ಗಡೆಯವರು ಅಭಿನಯದಲ್ಲೆಷ್ಟೋ ಅಷ್ಟೇ ಅಥವಾ ಅದಕ್ಕೂ ಹೆಚ್ಚು ಪಳಗಿದವರು. ಇದು ತನಕ ಸೇರಿದವರಲ್ಲಿ ಮೂರೂರ ದೇವರು ಹೆಗಡೆ, ಶ್ರೀ। ಶಂಕರನಾರಾಯಣ ಸಾಮಗ, ಗೋವಿಂದ ಶೇರುಗಾರ, ಕೊಕ್ಕರಣೆ ನರಸಿಂಹ ಕಾಮತ, ಹುಲಿಮನೆ ಪರಮೇಶ್ವರ ಶಾಸ್ತ್ರಿ, ಇವರು ಗಣ್ಯರು. ಕಳೆದ ವರ್ಷದಿಂದ ಸ್ವಂತವಾಗಿ ಸಂಚಾರಿ ಥ್ಯೇಟರನ್ನೇ ತಯಾರಿಸಿಕೊಂಡಿದ್ದಾರೆ. ಹಳೆಯ ಸಂಪ್ರದಾಯದ ಮೂಡ್ಕಣಿ ನಾರಾಯಣ ಹೆಗಡೆ, ಪರಮಯ್ಯ ಹಾಸ್ಯಗಾರರನ್ನುಳಿದು, ಈಗಿನವರಲ್ಲಿ ಶಿವರಾಮ ಹೆಗಡೆಯವರೇ ಸದ್ಯ ಮೊದಲನೆಯ ಕಲಾವಿದರು.

ಮೊದಮೊದಲು ಬಬ್ರುವಾಹನ, ಚಿತ್ರಸೇನ ಮೊದಲಾದ ಪೊಗಡೆಯ ವೇಷಗಳನ್ನು ಮಾಡಿ ಶಹಾಭಾಸುಗಿರಿಪಡೆದ ಹೆಗಡೆಯವರು ಅನಂತರ ಸುಯೋಧನ, ಅರ್ಜುನ, ಬಲರಾಮ ಮುಂತಾದ ಕಿರೀಟಪಾತ್ರಗಳನ್ನು ವಹಿಸಿ ಮೆರೆಯತೊಡಗಿದರು. ಸಂಧಾನದ ಸುಯೋಧನ, ಗದಾಪರ್ವದ ಕೌರವ, ಹೆಗಡೆಯವರ ಹಕ್ಕಾಗಿಬಿಟ್ಟಿದೆ. ನಿಜವಾಗಿಯೂ ಸಂಧಾನದ ಸುಯೋಧನನ ಆ ವೀರ ಅಟ್ಟಹಾಸ, "ಅಹಹ ಕೇಳಿದೆಯ ಕರ್ಣ" ಎಂಬಲ್ಲಿನ ದರ್ಪ ಗಾಂಭೀರ್ಯ, "ನಡೆಯಲೋ ಮುರಾರಿ ಸುಖದೊಳೂ" ಎಂಬಲ್ಲಿನ ಆ ಹೆಜ್ಜೆಯ ಗತ್ತು, ಪರಿಹಾಸ್ಯ, ಉಚಿತಾಭಿನಯ, ಹಿತಮಿತವಾದ ಅರ್ಥಗರ್ಭಿತ ಮಾತುಗಾರಿಕೆಗಳು ಯಾರ ಮನಸ್ಸನ್ನೂ ಸೂರೆಗೊಳ್ಳಬಲ್ಲವು

ಹಾಗೆಯೇ ಗದಾಪರ್ವದ ಕೌರವ. ಭಾರತಯುದ್ಧದ ಕೊನೆಯ ದಿನ. ಮುತ್ತಜ್ಜ ಭೀಷ್ಮ, ಗುರುದ್ರೋಣ, ಮಿತ್ರಕರ್ಣ, ಸೋದರ, ಬಂಧು ಬಾಂಧವರನ್ನೆಲ್ಲಾ ಕಳಕೊಂಡ ಹತಾಶನಾದ ಕೌರವನು ರಂಗಕ್ಕೆ ಬರುತ್ತಾನೆ. "ಕುರುರಾಯನಿದನೆಲ್ಲ ಕಂಡು ಸಂತಾಪದಿ ........................" ಎಂಬ ಪದ್ಯ ಮಾಯಾಮಾಳವಗೌಳ ರಾಗದಲ್ಲಿ ಕೇಳಿಬರುತ್ತಿದೆ. ಮಧುರ ಕಂಠ, ಜೊತೆಗೆ ಜೋಲುಮುಖ. ಪದ್ಯ ಚಲನೆಯ ವಿಧಾನವೇ ಪ್ರೇಕ್ಷಕರನ್ನು ಮುಗ್ಧರನ್ನಾಗಿ ಮಾಡಿಬಿಡುತ್ತದೆ. ಅಲ್ಲಿಯ ಆ ಅನುಕಂಪವೇನು! ಪರಿತಾಪವೆಂತಹುದು! ಅಳುತ್ತಾನೆಯೇ? ಇಲ್ಲ. ಅಳಿಸುತ್ತಾನೆ,–ಆದರೆ........................ಆತನ ಕಣ್ಣಂಚಿಗೆ ಮಾತ್ರ ನೀರು ಬಂದಿದೆಯೋ, ಏನೊ! ಆ ಧ್ವನಿಯಲ್ಲೇ, ಸ್ವರದಲ್ಲೇ ಅಷ್ಟು ಸಂತಾಪ. ಸಂಜಯ ಬರುತ್ತಾನೆ, ಆಗ. "ತಲೆಯ ಕಡಿವೆನು ಪಾಂಡುತನಯರನು ನಾಳೆ" ಎಂಬ ಪದ್ಯಸಮೂಹಗಳಲ್ಲಿನ ಆ ಕಿಚ್ಚು, ಕೆಚ್ಚು ವಿದ್ವೇಷಗಳು ಎಂಥವರನ್ನೂ ರೋಮಾಂಚನಗೊಳಿಸುತ್ತವೆ. "ಊಟದಲಿ ನಿಪುಣ ........................ "ನಿನ್ನಯ ಬಲುಹೇನೂ.... ..............." "ನೋಡಿರಿ ಧರ್ಮಜ ಫಲುಗುಣಾದಿಗಳೂ ......................" ಎಂಬ ಪದ್ಯಗಳಲ್ಲಿನ ಆ ಪರಿಹಾಸ್ಯ, ಆ ಕಟೂಕ್ತಿ, ಆ ವಿಡಂಬನೆ, ಅದಕ್ಕೆ ಅನುಗುಣವಾದ ಕೊಂಕು ಕುಣಿತಗಳೆಲ್ಲಾ ಪ್ರೇಕ್ಷಕವೃಂದದ ಮನಸ್ಸನ್ನು ಸೆರೆಹಿಡಿಯುವವು. ಬಹುಶಃ ವಿರೋಧಿ ಪಾತ್ರವನ್ನು ಅಪಹಾಸ್ಯಗೈವಲ್ಲಿನ ನಟನೆ, ಅಭಿನಯ, ಕುಣಿತಗಳು ಅಪೂರ್ವವಾದವು.

ಈ ಕೌರವನಿಗೆ ಸರಿಯಾಗಿ ಮೂರೂರದೇವರು ಹೆಗಡೆಯವರ ಭೀಮ. ಆ ಭೀಮನನ್ನು ಕಂಡರೇ ಈ ಕೌರವನಿಗೆ ಆವೇಶ ಹೆಚ್ಚು.

ಬಲರಾಮ, ಅರ್ಜುನ ಈ ಪಾತ್ರಗಳನ್ನೂ ನಿರ್ವಹಿಸುವಲ್ಲಿ ಹೆಗಡೆಯವರು ನಿಸ್ಸೀಮರು. ಮೃದಂಗವನ್ನೂ ಬಾರಿಸಬಲ್ಲ, ಸಂದರ್ಭದಲ್ಲಿ ಭಾಗವತರೂ ಆಗಬಲ್ಲ ಶಿವರಾಮ ಹೆಗಡೆಯವರು ಉತ್ತರ ಕನ್ನಡದ ಶ್ರೇಷ್ಠ ಕಲಾವಿದರೆಂಬುದು ನಿರ್ವಿವಾದ.

ಇದೇ ಹೆಗಡೆಯವರ ಅಣ್ಣನ ಮಗ ಮಹಾಬಲ ಹೆಗಡೆಯವರು ಉತ್ತಮ ಸಂಗೀತಗಾರರು. ಆಗಾಗ ಭಾಗವತಿಕೆಯನ್ನೂ ಮಾಡುತ್ತಾರೆ. ಕೃಷ್ಣನ ಪಾತ್ರ ಇವರ ಎಲ್ಲ ಪಾತ್ರಗಳಲ್ಲಿ ಹೆಚ್ಚು ಜನಪ್ರಿಯವೆನ್ನಿಸಿದೆ. ವೇಷಧರಿಸಿಕೊಂಡು ಚೆನ್ನಾಗಿ ಹಾಡಿಯೇ ಪ್ರೇಕ್ಷಕರನ್ನು ಒಲಿಸಿಕೊಳ್ಳುತ್ತಾರೆ. ಈಗೀಗ ಮೋಹಿನಿ, ಮೇನಕೆ ಮುಂತಾದ ಶೃಂಗಾರರಸಪ್ರಧಾನ ಸ್ತ್ರೀಪಾತ್ರಗಳನ್ನೂ ವಹಿಸತೊಡಗಿದ್ದಾರೆ. ಕೆರೆಮನೆ ಮೇಳದಲ್ಲಿಯೇ ಇಂದಿಗೂ ಇದ್ದಾರೆ. ಮಾತಿನ ಮಧ್ಯೆ ಹಾಸ್ಯದ ಚಟಾಕಿ ಹಾರಿಸುವದರಲ್ಲಿ ಪಳಗಿದವರು. ತುಂಟಪಾತ್ರ ವಹಿಸುವದೆಂದರೆ ಇವರಿಗೆ ಬಲು ಪ್ರೀತಿ. ಚರ್ಚೆಯೂ ಇಷ್ಟವೇ.

ಮಾಳಕೋಡ ಗಣಪ ಹೆಗಡೆಯವರೆಂಬವರೂ ಇದೇ ಮೇಳದವರು. ಧರ್ಮರಾಜ, ಅಕ್ರೂರ, ಮುಂತಾದ ವೇಷ ವಹಿಸುವದರಲ್ಲಿ ವಿಶಾರದರು. ರಂಗಸ್ಥಳದಲ್ಲಿ ಚರ್ಚೆ ಚುರುಕಿನದಾಗಿ ನಡೆಯಬೇಕೆಂದೂ, ನಟರು ಆ ವಿಷಯದಲ್ಲಿ ತಾತ್ಸಾರ ಮಾಡಕೂಡದೆಂದೂ, ಸಾಧ್ಯವಾದಷ್ಟು ಪ್ರಯತ್ನ ನಡೆಸಬೇಕೆಂಬುದೂ ಇವರ ಭಾವನೆ.

ಹುಲಿಮನೆ ಪರಮೇಶ್ವರ ಶಾಸ್ತ್ರಿಗಳೂ ಈ ಮೇಳದಲ್ಲಿ ಪ್ರಹಸ್ತ, ಕೃಷ್ಣ, ಭೀಮ ಮುಂತಾದ ಪಾತ್ರಗಳನ್ನು ವಹಿಸಿದ್ದಾರೆ. ವಾಗ್ಭೂಷಣಾಲಂಕೃತರಾದವರ ಮಾತಿನ ಚಾಕಚಕ್ಯತೆಗೆ ಬೆರಗಾದವರಿಲ್ಲ. ಬದಿಯಡ್ಕದಲ್ಲಿ ಪಾಂಡೇಶ್ವರರ ಹಿರಿಯತನದಲ್ಲಿ ಜರುಗಿದ ಅ. ಕ. ಯಕ್ಷಗಾನ ಪರಿಷತ್ತಿನಲ್ಲಿ ಇವರು ಭಾಗವಹಿಸಿದ್ದರು. ಸಾಮಗ ಮತ್ತು ಇವರ ಜೊತೆಗೂಡುತ್ತದೆಂದರೆ ಥೇಟರು ತುಂಬುವದು. ಕುಣಿತಬಾರದ, ಇವರಿಗೆ ತಾಳಮದ್ದಳೆಯೇ ಕೀರ್ತಿ ತರಬಲ್ಲದ..

ಯಾಜಿ ಭಾಗವತರು ಈ ಮೇಳದ ಸ್ಥಾಪನೆಯೊಂದಿಗೇ ಸೇರಿಕೊಂಡ

ವರು. ಮೇಳದ ವ್ಯವಸ್ಥಾಪಕರೆಂದರೂ ಸಲ್ಲುತ್ತದೆ ಒಳ್ಳೆಯ ಅನುಭವಿಕ ಭಾಗವತರು. ಮಂಡಳಿಯ ಸಂಘಟಿತ ಚಾಲನೆಗೆ ಇವರೇ ಮುಖ್ಯ ಕಾರಣರು. ಕನ್ನಯ್ಯ ಭಂಡಾರಿ, ಮಕ್ಕಿ ಮಾಬ್ಲೇಶ್ವರ ಹೆಗಡೆ, ಉಂಚಗೇರಿ ಅವರ ನಂತರ ಮೊದಲನೆಯ ಸ್ಥಾನಕ್ಕೆ ಯೋಗ್ಯನಾದ ಅಸಾಮಿ. ಮಕ್ಕಿ ಮಾಬ್ಲೇಶ್ವರರು ಜಿಲ್ಲೆಯಲ್ಲಿಯೇ ಒಳ್ಳೆಯ ಭಾಗವತರೂ ಹೌದು. ಈಗ ಇಳಿವಯಸ್ಸು. ಭಾಗವತಿಕೆಗಿಂತ ಮೃದಂಗವಾದನದಲ್ಲಿ ಅತೀವ ನೈಪುಣ್ಯ ಸಂಪಾದಿಸಿದವರು. ತಾಳದಲ್ಲಿ ಅಗಾಧಗತಿಯುಳ್ಳವರು. ಕಡತೋಕೆ ಶಂಭು ಭಾಗವತರ ಜೊತೆ ಮೃದಂಗಗಾರರಾಗಿ, ಅನಂತರ ಕರ್ಕಿ ಮೇಳದ ಭಾಗವತರಾಗಿ ೩-೪ ವರ್ಷಗಳವರೆಗೆ ಇದ್ದರು. ಸದ್ಯಃ ವಿಶ್ರಾಂತರಾಗಿದ್ದಾರೆ. ಕನ್ನಯ್ಯನೂ ಉತ್ತಮ ಮೃದಂಗವಾದಕ.

ಇನ್ನು ಮಣ್ಣಿಗೆ ತಿಮ್ಮಣ್ಣ ಯಾಜಿ. ಮಲ್ಲಗದ್ದೆ ಗಣೇಶ ಹೆಗಡೆ, ವಿನಾಯಕ ಭಟ್ಟ, ಮೊದಲಾದ ನಟರೂ, ರಕ್ಕಸಿ, ಸಿಂಹ, ಹಾಸ್ಯಪಾತ್ರಗಳಿಗೆ ಹೆಸರಾದ ಧಾರೇಶ್ವರ ಸುಬ್ಬನೂ ಈ ಮೇಳದಲ್ಲಿದ್ದಾರೆ. ಈ ಮೇಳದವರೂ ೧೦-೧೨ ವರ್ಷಗಳ ಹಿಂದೆ ಬೆಳಗಾಂವಿಗೆ ಹೋಗಿ ಅಲ್ಲಿ ಯಕ್ಷಗಾನದ ಯಶೋದುಂದುಭಿಯನ್ನು ಮೊಳಗಿಸಿ ಬಂದಿದ್ದರು. ೨ ವರ್ಷಗಳ ಹಿಂದೆ ಮತ್ತೊಮ್ಮೆ ಹೋಗಿ ಯಕ್ಷಗಾನ ಕಲೆಯ ಗರಿಮೆಯ ಅರಿವು ಮಾಡಿಕೊಟ್ಟಿದ್ದಾರೆ. ಕುಮಟೆಯಲ್ಲಿ ಶ್ರೀ। ಬಿ ಜಿ. ಖೇರರು ಈ ಮೇಳದ ಆಟವನ್ನು ಮೆಚ್ಚಿದ್ದರು. ಧಾರವಾಡದಲ್ಲೊಮ್ಮೆ ಬಾನುಲಿಯಿಂದ ಇವರ ಕಾರ್ಯಕ್ರಮ ೩-೪ ವರ್ಷಗಳ ಹಿಂದೆ ಪ್ರಸಾರವಾಗಿತ್ತು. ಜಿಲ್ಲೆಯ ಎಲ್ಲ ಸಮ್ಮೇಲನ, ಪರಿಷತ್ತುಗಳಲ್ಲಿ ಭಾಗವಹಿಸುತ್ತಾರೆ. ಈ ಮೇಳದಷ್ಟು ಥೇಟರಾಟ ಕುಣಿಯುವ ಮೇಳ ಇನ್ನಾವುದೂ ನಮ್ಮಲ್ಲಿಲ್ಲವೆನ್ನಲಡ್ಡಿಯಿಲ್ಲ. ಸದ್ಯಃ ವಿಶ್ರಾಂತರಾದ ವೃದ್ಧ ನಟರಾದ ಶ್ರೀ। ಮೂಡ್ಕಣಿ ನಾರಾಯಣ ಹೆಗಡೆಯವರು ಇವರಿಗೆಲ್ಲಾ ಉಪದೇಶಕರು, ಮಾರ್ಗದರ್ಶಕರು ಡಾ। ಎಸ್. ಪದ್ಮನಾಭಯ್ಯ ಹೈಗುಂದರವರೂ ಆಗಾಗ ಈ ಮೇಳದಲ್ಲಿ ಪಾತ್ರವಹಿಸುವದುಂಟು.

ಮೂರೂರು ದೇವರುಹೆಗಡೆಯವರೂ ಭೀಮ, ವಿಶ್ವಾಮಿತ್ರ, ಕಂಸ, ಕಶ್ಯಪ, ರಾವಣ ಮೊದಲಾದ ಖಳಪಾತ್ರಕ್ಕೆ ಹೆಸರಾದವರು. ಇವೆಲ್ಲಕ್ಕಿಂತಲೂ ಅಧಿಕವಾಗಿ ಅವರನ್ನು ಕೀರ್ತಿವಂತರನ್ನಾಗಿ ಮಾಡಿದ್ದು ಅವರ ದುಷ್ಟಬುದ್ಧಿ ಪಾತ್ರ. ಆ ಪಾತ್ರದ ಮಟ್ಟಿಗೆ "ನಭೂತೋ ನ ಭವಿಷ್ಯತಿ"

ಎನ್ನುವಷ್ಟು ಧೈರ್ಯವಮಾಡಬಹುದು. ಈಗ ಅವರೇ ಸ್ವತಃ, ಈಶ್ವರ ಹೆಗಡೆ ಮೂಲಿತೋಟ, ಸತ್ಯಭಟ್ಟರು, ಕಲ್ಲಬ್ಬಿ ವಿಷ್ಣು ಹೆಗಡೆ, ಕಡತೋಕೆ ಕೃಷ್ಣಭಟ್ಟ, ಏಕ್ಟರ ಜೋಶಿ ಮುಂತಾದವರನ್ನು ಕಲೆಹಾಕಿಕೊಂಡು ಒಂದು ಮಂಡಳಿಯನ್ನು ಸ್ಥಾಪಿಸಿದ್ದಾರೆ. ಈಶ್ವರ ಹೆಗ್ಗಡೆಯುವರು ಒಳ್ಳೆಯ ವಿದೂಷಕ ಪಾತ್ರಧಾರಿಗಳು ದಿಲ್ಲಿಗೆ ಹೋಗುವಾಗ ಕರ್ಕಿ ಮೇಳದವರ ಸಂಗಡ ಇವರೂ ಇದ್ದರು. ಮೂರೂರು ಮೇಳದವರು, "ಚಂದ್ರಹಾಸ ಚರಿತೆ", "ಕಂಸವಧೆ", "ಪ್ರಹ್ಲಾದ ಚರಿತ್ರೆ" ಮುಂತಾದ ಆಖ್ಯಾನಗಳನ್ನು ಅಮೋಘವಾಗಿ ಅಭಿನಯಿಸಬಲ್ಲರು. ಈ ಮೇಳದಲ್ಲಿ ಚೆನ್ನಾಗಿ ಕುಣಿವವರು ಕಡಿಮೆ.

ಗೋಕರ್ಣದ ಏಕ್ಟರ ಜೋಶಿಯುವರೂ ಮೊದಲು ಕೆರೆಮನೆ ಮೇಳದಲ್ಲಿ ಭಾಗವಹಿಸುತ್ತಿದ್ದು, ಉತ್ತರ, ಕುಳಿಂದ, ಧರ್ಮರಾಯ, ಏಕಲವ್ಯ, ನಕ್ಷತ್ರಕ ಪಾತ್ರಗಳನ್ನು ನಭೂತಪೂರ್ವವಾಗಿ ಅಭಿನಯಿಸುತ್ತಿದ್ದರು. ಯಕ್ಷಗಾನ ಮೇಳಗಳಲ್ಲಿ ಇವರಷ್ಟು ದೊಡ್ಡ ಕಂಠ ಮತ್ತ್ಯಾರಿಗೂ ಇಲ್ಲ. ೨-೩ ಸಾವಿರ ಜನರು ನೆರೆದ ಸಭೆಯಲ್ಲಾದರೂ ಧ್ವನಿವರ್ಧಕ ಯಂತ್ರದ ಸಹಾಯವಿಲ್ಲದೇ ಎಲ್ಲರಿಗೂ ಸರಿಯಾಗಿ ಕೇಳಿಸುವಂತೆ ಮಾತಾಡಬಲ್ಲ ವಾಗ್ಮೋಧರಿವರು. ಈಗ ಮೂರೂರು ಮೇಳದಲ್ಲಿದ್ದಾರೆ. ಉತ್ತಮ ವಕ್ತಾರರು.

ಕಲ್ಲಬ್ಬೆ ವಿಷ್ಣುಹೆಗಡೆಯುವರು ಸ್ತ್ರೀ ಪಾತ್ರಧಾರಿಗಳು. ಮುದ್ದಾದ ಮುಖ, ಸಣ್ಣ, ಸುಂದರ ಆಕೃತಿ, ಧ್ವನಿಯೂ ಹಾಗೆಯೇ. ಪ್ರಭಾವತಿ, ದೇವಕಿ, ಕಯಾದು ಮುಂತಾದ ಸ್ತ್ರೀ ವೇಷಗಳನ್ನೂ, ಕೃಷ್ಣ ಮುಂತಾದ ಲಲಿತ ಪಾತ್ರಗಳನ್ನೂ ನಿರ್ವಹಿಸುವುದರಲ್ಲಿ ಜಾಣರು.

ಸತ್ಯಭಟ್ಟರು ಶಾಂತರಸಪ್ರಧಾನ ಪಾತ್ರಗಳಿಗೆ ಮೀಸಲಾದವರು. ಧರ್ಮರಾಯ, ವಸುದೇವ ಮೊದಲಾದ ಪಾತ್ರ ಇವರದು.

ಕಡತೋಕೆ ಕೃಷ್ಣಭಟ್ಟರು ಭಾಗವತರು. ಕರ್ಕಿಮೇಳದಲ್ಲಿ ೨-೩ ವರ್ಷವಿದ್ದುಕೊಂಡು ಅಲ್ಲೆ ತರಬೇತಿಪಡೆದವರು. ಕಂಠ ಚೆನ್ನಾಗಿದೆ. ಪಟ್ಟಣದ ಭಂಡಾರಿಯುವರು ಮೃದಂಗವಾದಕರು.

ದೇವರು ಹೆಗಡೆ, ವಿಷ್ಣುಹೆಗಡೆ, ಈಶ್ವರ ಹೆಗಡೆ, ಸತ್ಯಭಟ್ಟರೆಲ್ಲಾ ೨ ೩ ವರ್ಷಕಾಲ ಕರ್ಕಿಮೇಳದಲ್ಲಿಯೂ ಇದ್ದರು.

ಕೊಂಡದಕುಳಿ ಮೇಳ:—(ಹೊನ್ನಾವರ) ಕೊಂಡದಕುಳಿಯ ರಾಮ ಹೆಗಡೆ, ಲಕ್ಷ್ಮಣಹೆಗಡೆಯವರೇ ಇದಕ್ಕೆ ಪ್ರಧಾನರು. ಮೂಡ್ಕಣಿಯವರ ಮಾರ್ಗದರ್ಶನದಲ್ಲಿ ನಡೆಯುತ್ತಿರುವ ಈ ಮೇಳ ೨—೩ ಸಲ ಕೆರೆಮನೆ ಮೇಳದೊಂದಿಗೆ ವಿಲೀನವಾಗಿತ್ತು. ಈಗ ಮತ್ತೆ ಸ್ವತಂತ್ರವಾಗಿದೆ.

ರಾಮಹೆಗಡೆಯವರು ವಾಲಿ, ಭೀಮ, ರಾವಣ, ಬಲರಾಮ ಮುಂತಾದ ಪಾತ್ರನಿರ್ವಹಣೆಯಲ್ಲಿ ನಿಪುಣರು. ವಾಲಿಯ ಮಟ್ಟಿಗಂತೂ ಇವರನ್ನು ಬಿಟ್ಟರಿಲ್ಲವೆನ್ನುವಂತಿದೆ. ಹರಿತವಾದ ಮಾತುಗಾರಿಕೆ. ತ್ವರಿತವೂ ಹೌದು. ಚರ್ಚೆಮಾಡುವದರಲ್ಲಿ ತುಂಬಾ ಉತ್ಸಾಹಿಗಳು. ಬುದ್ಧಿವಂತಿಕೆಯ ಮಾತಾಡಿ ಎದುರಾಳಿಯನ್ನು ಅಧೀರನನ್ನಾಗಿ ಮಾಡಲಿಕ್ಕೆ ಇವರಿಗೆ ಸಾಟಿಯಾದವರು ಇವರೇ. ಇವರ ಸೋದರ ಲಕ್ಷ್ಮಣ ಹೆಗಡೆಯವರು ಆಂಜನೇಯ, ಜಾಂಬವಂತ ಈ ಪಾತ್ರಗಳಿಗೇ ಮೀಸಲಾದವರು. ಪಾತ್ರಕ್ಕುಚಿತವಾದ ರೂಪು, ಆಕೃತಿ. ನಂಜುಂಡಯ್ಯನ ತರುವಾಯ ಹನುಮಂತನ ಪಾತ್ರಕ್ಕೆ ಲಕ್ಷ್ಮಣಹೆಗಡೆಯವರೇ ಸರಿ ಎಂಬುದು ಇಲ್ಲಿಯ ಜನವಾಣಿ. ಚರ್ಚೆ, ಮಾತು, ಕುಣಿತಗಳಲ್ಲೆಲ್ಲಾ ಅಣ್ಣನದೇ ರೀತಿ. ಮಾತು ಪ್ರಾರಂಭವಾಗಿ ಬಿಟ್ಟರಂತೂ ತೀರಿಯೇಹೋಯಿತು. ದ್ರೌಪದಿ ಪ್ರತಾಪದ ಭೀಮ-ಅರ್ಜುನ, ಅಂಗದ-ಪ್ರಹಸ್ತ ಮುಂತಾದ ಜೊತೆಗಳು ಅಪರೂಪ. ಕುಣಿತದಲ್ಲಿ ಧಾರ್ಷ್ಟ್ಯ. ಗಡಸುಗಾರಿಕೆಯೇ ಹೆಚ್ಚು.

ಗುಂಡಿಬೈಲಿನ ಗಣೇಶ ಭಟ್ಟರೂ ವಿಷ್ಣು ಭಟ್ಟರೂ ಇವರಂತೆ ಸಹೋದರರು. ಮಾಳಕೋಡ ಗಣೇಶ ಭಾಗವತರು, ಮೇಳದ ಹಾಡುಗಾರ. ಗುಣವಂತೆಯ ಮಂಜಯ್ಯ ಭಂಡಾರಿ ಮೃದಂಗವಾದಕ. ಈ ಮೇಳದವರ "ವಾಲೀವಧೆ", "ಲಂಕಾದಹನ", "ಮಾರುತಿ ಪ್ರತಾಪ", "ರಾಮಾಂಜನೇಯ ಕಾಳಗ" ಮುಂತಾದವು ಅವಶ್ಯ ನೋಡಬೇಕಾದಂಥವುಗಳು.

ಶ್ರೀ ಸಿದ್ಧಿ ವಿನಾಯಕ ಮಿತ್ರಮಂಡಳಿ ಶಿರಸಿ:— ಈ ಮಂಡಳಿಯು ಸ್ಥಾಪನೆಯಾಗಿ ೪-೫ ವರ್ಷಗಳಾದುವು. ಪ್ರತಿವರ್ಷ ಸರಕಾರ ಸಹಾಯಧನ ಮೀಯುತ್ತಲಿದೆ. ಈ ಸಂಸ್ಥೆಯು ಯಕ್ಷಗಾನ, ನಾಟಕ ಮತ್ತು ಸಾಹಿತ್ಯಗಳೆಂಬುದಾಗಿ ಮೂರು ವಿಭಾಗಗಳನ್ನೊಳಗೊಂಡಿದೆ. ಅಖಿಲ ಭಾರತ ಕೊಂಗ್ರೆಸ್ ಅಧ್ಯಕ್ಷರಾದ ಶ್ರೀ॥ ದೇಭರರು ಇವರ ಯಕ್ಷಗಾನ ನಾಟಕವನ್ನು ನೋಡಿ ಸಂತೋಷಪಟ್ಟಿದ್ದಾರೆ.

ಶ್ರೀ। ವಿ. ಟಿ. ಶೀಗೆಹಳ್ಳಿಯವರು ಪ್ರಧಾನ ನಟರು. ಅವರು ಒಳ್ಳೆಯ ಲೇಖಕರೂ ಹೌದು. ಅವರು ತಾಳಮದ್ದಳೆಗಳಲ್ಲಿಯೂ ಭಾಗ ವಹಿಸಿ ಕರ್ಣ, ಕೃಷ್ಣ ರಾಮ ಮುಂತಾದ ಅರ್ಥಗಾರಿಕೆಯಲ್ಲಿ ಕೀರ್ತಿ ಗಳಿಸಿದ್ದಾರೆ. ಪಾತ್ರಗಳ ಹೃದಯವನ್ನು ಹೊಕ್ಕು ಆಳವಾಗಿ ಅಭ್ಯಸಿಸ ಬೇಕೆನ್ನುತ್ತಾರೆ. ಸ್ವತಃ ತಾವೂ ಅನುಷ್ಠಾನಮಾಡುತ್ತಾರೆ. ರಂಗಸ್ಥಳ ದಲ್ಲಿಯೂ ಸುಯೋಧನ, ದೇವೇಂದ್ರ, ಕೃಷ್ಣ ಈ ಪಾತ್ರಗಳನ್ನು ವಹಿಸಿ ರಂಜಿಸಿದ್ದಾರೆ. ಅಭ್ಯಾಸಮಾಡಿದರೆ ಕುಣಿತದ ಕಲಿಕೆ ಇವರಿಗೆ ಕಷ್ಟವಲ್ಲ. ಅಭಿನಯ, ಹಾವಭಾವಗಳನ್ನು ಯೋಗ್ಯವಾಗಿ ಮಾಡುತ್ತಾರೆ. ಒಳ್ಳೆಯ ಸಂಗೀತಗಾರರಿದ್ದಾರೆ. ಮೋರೆಯಲ್ಲಿ ಭಾವಪ್ರಕಟಿಸುವದರಲ್ಲಿ ಪ್ರವೀಣರು. ಭಾವ, ರಸಪರಿಪ್ಲುತವಾದ ಪಾತ್ರಪರಿಪೋಷಕವಾದ ಯೋಗ್ಯ ಮಾತು ಗಾರಿಕೆ. ಮಾತು ಮುತ್ತಿನಹಾರದಂತೆ.

ಇವರ ಸಹೋದರ ಶ್ರೀ। ರಂಗನಾಥ ಶೀಗೆಹಳ್ಳಿಯವರು ಹಾಸ್ಯ ಪಾತ್ರಗಳನ್ನು ಚೆನ್ನಾಗಿ ಮಾಡುತ್ತಾರೆ ಬಣ್ಣಗಾರಿಕೆಯಲ್ಲಿ ಪಳಗಿದವರು. ಕುಣಿತ ಕಡಿಮೆಯಾದರೂ ಉಳಿದ ನಟನೆಗಳಿಂದಲೇ ತುಂಬಿಕೊಳ್ಳುವ ಚಾಣಾಕ್ಷತೆ ಇವರಲ್ಲಿದೆ. "ಸಿಂಹಮುಖಿ" "ಸುಶರ್ಮ" ಮುಂತಾದವು ಹೆಸರಾಗಿವೆ.

ಜನಾರ್ಧನ ಹೆಗಡೆ ಶೀಗೆಹಳ್ಳಿಯವರು. ಭೀಮ, ನರಕಾಸುರ ಇತ್ಯಾದಿ ಭೀಕರ ಪಾತ್ರಗಳನ್ನೇ ಅಭಿನಯಿಸುತ್ತಾರೆ. ಧ್ವನಿಯೂ ದೇಹದಂತೆಯೇ ದೊಡ್ಡ ಗಂಭೀರ, ಭೀಕರ. ಕುಣಿತವನ್ನು ಕಲಿಯಬೇಕೆನ್ನುತ್ತಾರೆ. ತಾಳ ಮದ್ದಳೆಯಲ್ಲಿಯೂ ಭಾಗವಹಿಸುತ್ತಾರೆ.

ಒಂದಾನೊಂದು ಕಾಲದಲ್ಲಿ ಸ್ತ್ರೀಪಾತ್ರಗಳಿಗೇ ಮೀಸಲಾದ, ಖ್ಯಾತ ರಾದ ಮೂರೂರು ಕೃಷ್ಣ ಹೆಗಡೆಯವರು ಭಾಗವತರು. ಕಲ್ಮನೆ ದತ್ತಾ ತ್ರಯ ಹೆಗಡೆ ಈ ಮಂಡಳಿಯ ಸ್ತ್ರೀಪಾತ್ರಧಾರಿ. ಕುಣಿತ ಚೆನ್ನಾಗಿದೆ. ರೂಪು ಒಳ್ಳೆಯದೇ. ಕೊಡಗಿಪಾಲ ಶಿವರಾಮ ಹೆಗಡೆಯವರೂ ಕುಣಿತ ಚೆನ್ನಾಗಿ ಬಲ್ಲ ನಟರು. ಅರ್ಜುನ, ಬಲರಾಮ, ಹನುಮಂತ ಮುಂತಾದ ಪಾತ್ರವಹಿಸಿ ಮೆರೆಯುತ್ತಿದ್ದಾರೆ. ಕಳವೆ ದೀಕ್ಷಿತರು ಹಾಸ್ಯಗಾರರು. ಸೀತಾರಾಮ ಭಂಡಾರಿ ಮದ್ದಳೆಗಾರ.

ಸಿದ್ಧಾಪುರ ತಾಲೂಕಿನ ಹುಕ್ಲಮಕ್ಕಿ ಮೇಳದವರು, "ಇಂದ್ರಜಿತು ಕಾಳಗ," "ಗದಾಯುದ್ಧ" ಮುಂತಾದ ಆಖ್ಯಾನಗಳನ್ನು ಒಳ್ಳೆಯದಾಗಿ ಅಭಿನಯಿಸುತ್ತಾರೆ. ನೇರಲಮನೆ ಈಶ್ವರ ಹೆಗಡೆ, ದಂಟಕಲ್ ಸಣ್ಣಪ್ಪ ಹೆಗಡೆ, ಕಮಲಾಕರ ಹುಕ್ಲಮಕ್ಕಿ, ಮಂಜುನಾಥ ಹೆಗಡೆ ಹುಕ್ಲಮಕ್ಕಿ ಮೊದಲಾದ ನಟರಲ್ಲದೆ, ಹೊನ್ನೆಹದ್ದದ ನಾರಾಯಣ ಹೆಗಡೆಯವರು ಭಾಗವತರಾಗಿಯೂ, ಜಿಲ್ಲೆಯ ಉತ್ತಮ ಯಕ್ಷಗಾನ ಕವಿಗಳಾದ ಜಾನಕೈ ತಿಮ್ಮಪ್ಪ ಹೆಗಡೆಯವರು ಮೃದಂಗಕಾರರಾಗಿಯೂ ಇದ್ದಾರೆ. ತಾಳಗುಪ್ಪಾ, ಸಾಗರದ ಕಡೆಗಳಲ್ಲೆಲ್ಲಾ ಆಟಮಾಡಿ ರಂಜಿಸಿದ್ದಾರೆ.

ಇದೇ ತಾಲೂಕಿನ ಅಗ್ಗರೆಯಲ್ಲಿ ಯಕ್ಷಗಾನ ಸಂಘವಿದೆ. ಅಗ್ಗರೆ ಮಂಜಪ್ಪ ಭಾಗವತರು ಇದರ ಹಾಡುಗಾರರೂ ಹಾಗು ಹಿರಿಯರು. ಗೊದ್ಲಬೀಳ ಭಟ್ಟರು, ಪರಮೇಶ್ವರಯ್ಯ ಮುತ್ತಿಗೆ ಮೊದಲಾದ ಶ್ರೇಷ್ಠ ನಟರಿದ್ದಾರೆ. ಅವರಿಬ್ಬರೂ ಒಳ್ಳೆಯ ಮಾತುಗಾರಿಕೆಯನ್ನು ಪ್ರಯತ್ನ ಪಟ್ಟು ಸಾಧಿಸಿಕೊಂಡಿದ್ದಾರೆ.

ಶಿರಸಿ ತಾಲೂಕ ಶಿಂಗನಹಳ್ಳಿಯಲ್ಲಿ ಒಂದು ಯಕ್ಷಗಾನ ಮೇಳವಿದೆ. ಊರಕೇರಿ ಸುಬ್ರಾಯ ಭಾಗವತರಲ್ಲಿ ತರಬೇತಿ ಪಡೆದ ಈ ಮೇಳದವರ "ಇಂದ್ರಕೀಲ," "ಬಬ್ರುವಾಹನ ಕಾಳಗ" ಮೊದಲಾದುವು ಹೆಸರುಗೊಂಡಿವೆ ಇತ್ತಲಾಗಿ ತಯಾರಾದ ಹೊಸ ಮೇಳವಿದು ತಟ್ಟಿಸರ ಮಾಬ್ಲೇಶ್ವರ ಹೆಗಡೆಯವರು ಮೃದಂಗವಾದಕರು.

ಸಿದ್ಧಾಪುರ ತಾಲೂಕಿನ ಶಿಂಗೆಹಳ್ಳಿ ಮೇಳದವರು "ಲವ-ಕುಶರ ಕಾಳಗ," "ಧ್ರುವ ಚರಿತ್ರೆ" ಮೊದಲಾದ ಆಖ್ಯಾನಗಳನ್ನು ಉತ್ತಮವಾಗಿ ಆಡುತ್ತಾರೆ. ಈ ಮೇಳದಲ್ಲಿ ವಿದ್ಯಾರ್ಥಿಗಳೇ ಹೆಚ್ಚು.

ಗೋಕರ್ಣದ ಭದ್ರಕಾಳಿ ಯಕ್ಷಗಾನ ಸಂಘದಲ್ಲಿ ಏಕ್ಕರ ಜೋಶಿ, 'ನಾಗರಿಕ' ಪತ್ರಿಕಾ ಸಂಪಾದಕ ಶ್ರೀ। ಜಿ. ಜಿ. ಶಾಸ್ತ್ರಿ, ಶಂಕರ ಪಂಡಿತ, ಕೊಡ್ಲಕೆರೆ ಗಿರಿಯನ್ ಮುಂತಾದ ಒಳ್ಳೆಯ ನಟರಿದ್ದಾರೆ. ಸುಶಿಕ್ಷಿತರೇ ಹೆಚ್ಚಾಗಿರುವ ಈ ಸಂಘವು ೨ ವರ್ಷಗಳ ಹಿಂದೆ ಮುಂಬಯಿ ರಾಜ್ಯ ನಾಟ್ಯ ಮಹೋತ್ಸವದಲ್ಲಿ ಭಾಗಿಯಾಗಿತ್ತು. ರತ್ನಾವತಿ ಕಲ್ಯಾಣದ ಒಂದು ಭಾಗ ಧಾರವಾಡ ರೇಡಿಯೋದಿಂದ ಪ್ರಸಾರವಾಗಿದೆ.

ಇನ್ನು ಹೊನ್ನಾವರ ತಾಲೂಕಿನಲ್ಲಿ ಹೊಸಾಕುಳಿ ಮೇಳ, ಗುಂಡಬಾಳ ಮೇಳ, ಕಡತೋಕಾ ಮೇಳ, ಕುಮಟಾ ತಾಲೂಕಿನಲ್ಲಿ ಊರಕೇರಿ ಮೇಳ, ಕುಮಟಿ ಮೇಳಗಳೆಲ್ಲಾ ಇವೆ. ಅವಿನ್ನೂ ಸುಧಾರಿಸಿ ಪ್ರಗತಿಹೊಂದ ಬೇಕಾಗಿದೆ. ಕ್ರಮಬದ್ಧವಾಗಿ ನೃತ್ಯ, ಹಾಡುಗಾರಿಕೆ, ಅಭಿನಯಗಳನ್ನು ಕಲಿತುಕೊಂಡು ಮುಂದುವರಿಯಬೇಕು.

ಒಳ್ಳೊಳ್ಳೆಯ ಬಿಡಿನಟರೂ ಇದ್ದಾರೆ. ಯಾವ ಮೇಳದ ಜೊತೆಗಾದರೂ ಕುಣಿವ ಸಮರ್ಥರು. ಅಂಕೋಲೆಯ ಭಾವಿಕೇರಿ ರಾಮನಾಯಕ, ಜೋಗಿ ಬೀರಣ್ಣ ನಾಯಕ, ಹಿರೇಗುತ್ತಿ ವೆಂಕಟ್ರಮಣ ನಾಯಕ ಮೊದಲಾದವರೂ, ಯಲ್ಲಾಪುರ ತಾಲೂಕಿನ ಜಾಲಿ ದೇವಪ್ಪ ಹೆಗಡೆಯವರು, ಚಾರಗಲ್ಲ ಭಾಗವತರು, ಹೆಗಡೆಯ ಸಣ್ಣ ಹೆಗಡೆ, ಚಾವಡಿ ನಾರಾಯಣ ಭಟ್ಟರು ಇವರೆಲ್ಲ ಎಲ್ಲಿ ಬೇಕಾದರಲ್ಲಿ ಹೋಗಿ ಅಭಿನಯಿಸಿ ಜೈಸಬಲ್ಲವರು.

ಉ. ಕನ್ನಡ ಜಿಲ್ಲೆಯಲ್ಲಿ ಈಗಿರುವ ಮಂಡಲಿಗಳೂ, ಕಲಾವಿದರೂ ಉತ್ತರೋತ್ಕರ್ಷ ಹೊಂದಿ ಯಕ್ಷಗಾನಕ್ಕೆ ಇನ್ನೂ ಹೆಚ್ಚಿನ ಸೇವೆ ಸಲ್ಲುವಂತಾಗಲಿ! ಹೊಸ ನಟರು ಪ್ರಕಾಶಕ್ಕೆ ಬಂದು ಯಕ್ಷಗಾನ ಜ್ಯೋತಿ ಬೆಳಗಲಿ!



# ಒಂದಾಣೆ ಮಾಲೆಯಲ್ಲಿ
## ತಾ.27--4--57ರ ವರೆಗೆ ಪ್ರಕಟವಾದ ಪುಸ್ತಕಗಳು

೧. ‡ಕೆಪ್ಪಟೆರಾಯ (ವಿನೋದ ಕಥೆ) ದಿ। ಎಂ. ಎನ್. ಕಾಮತ್.
೨. ನಾರೀಶ್ವರರು (ದ್ವಿತೀಯ ಮುದ್ರಣ) ಶ್ರೀ। ಕುಡ್ಪಿ ವಾಸುದೇವ ಶೆಣ್ಯೆ.
೩. ಕಳ್ಳನಿಗೆ ಸಂಭಾವನೆ (ದ್ವಿತೀಯ ಮುದ್ರಣ) ಶ್ರೀ। ಎಲ್. ಎಸ್. ನಾಯಕ.
೪. ‡ಸದ್ರಿ ಸುಬ್ಬ (ಏಕಾಂಕ ಪ್ರಹಸನ) ದಿ। ಎಂ. ಎನ್. ಕಾಮತ್.
೫. ಅದ್ಭುತ ತ್ಯಾಗ (ದ್ವಿತೀಯ ಮುದ್ರಣ) ವೈದ್ಯಗುರು ಎಂ. ಆರ್. ಭಟ್.
೬. ‡ಚುನಾವಣೆ ಅರ್ಥಾತ್ ಬನಾವಣೆ (ಏಕಾಂಕ ಪ್ರಹಸನ) ಕುಡ್ಪಿ ವಾಸುದೇವ ಶೆಣ್ಯೆ.
೭. ‡'ಬೀಡಿ ಸೇದಬೇಡಿ' ಮತ್ತು 'ಆ ಮಗು' (ವಿನೋದ ಕಥೆಗಳು) ದಿ। ಎಂ.ಎನ್.
೮. ‡ಇಂಗ್ಲಿಷ್–ಕನ್ನಡ ಅರ್ಥಕೋಶ (ಭಾರತ ಸಂವಿಧಾನದಿಂದ) [ಕಾಮತ್.
೯. ಲಂಚಕ್ಕೆ ಸಂಚಕಾರ (ದ್ವಿತೀಯ ಮುದ್ರಣ) ಡಾ। ಎಸ್. ಪಿ. ಭಟ್.
೧೦. ‡ಟಿಶ್ಯೂ ಔಷಧಿಗಳ ಕೈಪಿಡಿ. ಶ್ರೀ। ಪಿ. ಎಸ್. ವೆಂಕಟಕೃಷ್ಣರಾವ್.
೧೧. ಶ್ರೀಕ್ಷೇತ್ರ ಧರ್ಮಸ್ಥಳ (ಐದನೇ ಮುದ್ರಣ).
೧೨. ಜೀವದ ಮೌಲ್ಯ (ದ್ವಿತೀಯ ಮುದ್ರಣ) ಶ್ರೀ। ಎಲ್. ಎಸ್. ನಾಯಕ.
೧೩. ‡ಸತ್ತವನ ಸೇಡು ಮತ್ತು ಇತರ ಕಥೆಗಳು ಡಾ। ವಿ. ಆರ್. ಭಟ್.
೧೪. ‡"ವೆಂಕಟನ ಸಂಕಟ" (ಏಕಾಂಕ ಪ್ರಹಸನ) ಮತ್ತು ಎರಡು ಕಥೆಗಳು
೧೫. ಬಾಬಿಗೆ ಬಾಸಿಂಗ (ದ್ವಿತೀಯ ಮುದ್ರಣ) ಶ್ರೀ। ಕುಡ್ಪಿ ವಾಸುದೇವ ಶೆಣ್ಯೆ.
೧೬. ವೇಣೂರಿನ ಗತವೈಭವ (ದ್ವಿ. ಮುದ್ರಣ) ದಿ। ಪಂಡಿತ ಲೋಕನಾಥ ಶಾಸ್ತ್ರಿಗಳು.
೧೭. ಒಗಟುಗಳು (ದ್ವಿತೀಯ ಮುದ್ರಣ) ಶ್ರೀ। ಟಿ. ಚಂದ್ರರಾಜ ಸೆಟ್ಟಿ.
೧೮. ಜಗಳಗಂಟಿ ಮತ್ತು ಇತರ ಕಥೆಗಳು (ದ್ವಿ.ಮು.) ವೈದ್ಯಗುರು ಎಂ. ಆರ್. ಭಟ್.
೧೯. ರಥೋತ್ಸವ.
೨೦. ‡ಕರಿನಾಯಿ ಮತ್ತು ಮುಪ್ಪು ದಿ। ಎಂ. ಎನ್. ಕಾಮತ್.
೨೧. ಭಾರತದ ಮಹಾನಗರಗಳು (ದ್ವಿ. ಮುದ್ರಣ) ಶ್ರೀ। ಟಿ. ಚಂದ್ರರಾಜ ಸೆಟ್ಟಿ.
೨೨. ತಿರುಕ್ಕುರಲ್ (ದ್ವಿತೀಯ ಮುದ್ರಣ) ಶ್ರೀ। ಡಿ. ಪುಟ್ಟಸ್ವಾಮಿ, ಎಡ್ವೊಕೇಟ್.
೨೩. ಸೂರ್ಯನ ಸಂಸಾರ ಮತ್ತು ಇತರ ಕಥೆಗಳು ಶ್ರೀ। ಬಿ. ಶಂಕರ ಭಟ್.
೨೪. ಭಾರತದ ಮಹಾನಗರಗಳು (ದ್ವಿತೀಯ ಮುದ್ರಣ) ಶ್ರೀ। ಟಿ. ಚಂದ್ರರಾಜ ಸೆಟ್ಟಿ.
೨೫. ಧೈರ್ಯ ಮತ್ತು ಇತರ ಸತ್ಯ ಕಥಾನಕಗಳು ಶ್ರೀ। ಎಲ್. ಎಸ್. ನಾಯಕ.
೨೬. ಮಾತಾವತಾರ (ದ್ವಿತೀಯ ಮುದ್ರಣ) ಶ್ರೀ। ಜಿ.ಆರ್.ಪಾಂಡೇಶ್ವರ.
೨೭. ಹಾಸವಿಲಾಸ [ದ್ವಿ.ಮು.] ಶ್ರೀ। ಕುಡ್ಪಿ ವಾಸುದೇವ ಶೆಣ್ಯೆ.
೨೮. ಸತ್ಯವಂತ ಬಾಬಿ [ದ್ವಿತೀಯ ಮುದ್ರಣ] ಶ್ರೀ। ಕುಡ್ಪಿ ವಾಸುದೇವ ಶೆಣ್ಯೆ.
೨೯. ಜಾಣ್ಮೆಯ ಒಗಟುಗಳು ಡಾ। ಎಸ್. ಪಿ. ಭಟ್.
೩೦. ಜಾತಕ ಕಥೆಗಳು [ದ್ವಿ.ಮು.] ಶ್ರೀ। ಎಂ. ಸುಬ್ರಾಯನ್.

ವಿಶೇಷ ಪ್ರಕಟಣೆ: ಮಕ್ಕಳ ಹಾಡುಗಳು (ದ್ವಿತೀಯ ಮುದ್ರಣ)

‡ಈ ಗುರುತು ಹಾಕಿದ ಪುಸ್ತಕಗಳ ಪ್ರತಿಗಳು ಮುಗಿದಿವೆ.

೬೬. ಜರಾಸಂಧ ವಧೆ ಶ್ರೀ| ಕೆ. ವಿ. ಮಯ್ಯ, ಬಂಟ್ವಾಳ.
೬೭. ಪ್ರಧಾನಾಮಾತ್ಯ ಪಂಡಿತ ಜವಾಹರಲಾಲ ನೆಹರು ಶ್ರೀ| ಕುಡ್ವಿ ವಾಸುದೇವ ಶೆಣೈ.
೬೮. ಕರುಣೆ ಮತ್ತು ಇತರ ಕಥೆಗಳು ಶ್ರೀ| ಬಳ್ಕೂರು ಸುಬ್ರಾಯ ಅಡಿಗ.
೬೯. ಶ್ರೀಕ್ಷೇತ್ರ ಉಡುಪಿ [ದ್ವಿ.ಮು.] ಶ್ರೀ| ಕೆ. ಪ್ರಭಾಕರ ರಾವ್.
೭೦. ವಿನೋದ ವಿಹಾರ —(ಆರಿಸಿ ತೆಗೆದ ನಗೆಹನಿಗಳು)
೭೧. ಭಾರತದ ಗತವೈಭವ ಶ್ರೀ| ಟಿ. ಚಂದ್ರರಾಜ ಸೆಟ್ಟಿ.
೭೨. ಸತ್ಯ ಹರಿಶ್ಚಂದ್ರ (ದ್ವಿತೀಯ ಮುದ್ರಣ) ಶ್ರೀ| ಪಿ. ವೆಂಕಟ್ರಮಣ ಭಟ್ಟ.
೭೩. ಸೂಕ್ತಿಗಳು ಶ್ರೀ| ಕೆ. ವೆಂಕಟರಾಯಾಚಾರ್ಯ.
೭೪. ಯಕ್ಷಗಾನ ಕಲಾವಿದರು (ನಟರ ಪರಿಚಯ) ಶ್ರೀ| ವಿಘ್ನೇಶ್ವರ ಶರ್ಮ ತಡ್ಗಲಸೆ.
೭೫. ದೇವರ ಸಾಮ್ರಾಜ್ಯದಲ್ಲಿ ಮತ್ತು ಇತರ ಕಥೆಗಳು ಶ್ರೀ| ಎಸ್. ಎನ್. ನವಕಾನ.
೭೬. ಕ್ರಾಂತಿಕಂಠೀರವ ಭಗತ್ ಸಿಂಘ ಶ್ರೀ| ಸತ್ಯಾಶ್ರಯ ಕಾಮತ್.
೭೭. ಜಾತಕಪಠನ ಮತ್ತು ಇತರ ಕಥೆಗಳು ಶ್ರೀ| ಕುಡ್ವಿ ವಾಸುದೇವ ಶೆಣೈ.
೭೮. ಅಮೃತವಾಣಿ (ಲೋಕನಾಯಕರ ವಚನಗಳು) ಶ್ರೀ| ಎಮ್. ಶ್ರೀಧರ ಕಿಣಿ.
೭೯. ಮಾಯಾಮೃಗ (ಏಕಾಂಕ ಪ್ರಹಸನ) ಶ್ರೀ| ಎ. ವಿ. ಮಯ್ಯ.
೮೦. ಡಾಕ್ಟರ್ ಗಾಂಧೀಜಿ ಶ್ರೀ| ಮರಕ್ಕಿಣಿ ಶಂಕರನಾರಾಯಣ ಭಟ್.
೮೧. ಶ್ರೀಶಂಕರಾಚಾರ್ಯರ ಜೀವನಚರಿತ್ರೆ(ತೃ. ಮು ) ಡಾ| ಪಿ. ಎಸ್. ವಾಸುದೇವ ಶರ್ಮ.
೮೨ " ವಿರಚಿತ ಸ್ತೋತ್ರಗಳು " " "
೮೩. ಬೆಡಗಿನ ನಾಡು—ಕೊಡಗು: ಶ್ರೀ| ಶ್ರೀಪತಿರಾವ್ ಫಲಿಮಾರ್ಕರ್, ಬಿ. ಎ, ಬಿ. ಟಿ.
೮೪. ಅಮೆಯ ಚಿಪ್ಪು ಮತ್ತು ಇತರ ಸತ್ಯಕಥೆಗಳು. ಶ್ರೀ| ಎಲ್. ಎಸ್. ನಾಯಕ್.
೮೫. ಮಂಗಳೂರಿಂದ ಮಥುರೆಗೆ ಶ್ರೀ| ಟಿ. ಚಂದ್ರರಾಜ ಸೆಟ್ಟಿ.
೮೬. ಸತೀ ವೃಂದಾ (ಏಕಾಂಕ ನಾಟಕ) ಶ್ರೀ| ಕೆ. ಸುಭಾಷ್ಚಂದ್ರ ಶೆಣೈ.
೮೭. ಗೌತಮನ ಗೃಹತ್ಯಾಗ ಮತ್ತು ಸಿದ್ಧಾರ್ಥನ ಕಾರುಣ್ಯ (ಎರಡು ಏಕಾಂಕಗಳು)
೮೮. ಗೃಹವೈದ್ಯ ಶ್ರೀ| ಬಳ್ಕೂರು ಸುಬ್ರಾಯ ಅಡಿಗ.
೮೯. ನಮ್ಮ ನಾಟಕಗಳು ಶ್ರೀ| ಎಂ. ಎಸ್. ಆಚಾರ್.
೯೦. ಜಾನಪದ ಕಥೆಗಳು ಶ್ರೀ| ಕೆ. ವೆಂಕಟರಾಯಾಚಾರ್ಯ.
೯೧. ಕೆಲವು ಉಪಯುಕ್ತ ಸಲಹೆಗಳು ಶ್ರೀ| ಬಳ್ಕೂಗು ಸುಬ್ರಾಯ ಅಡಿಗ.
೯೨. ಅಭಿಜ್ಞಾನ ಶಾಕುಂತಲದಲ್ಲಿ ಲೋಕನೀತಿ ಶ್ರೀ| ಕೆ.ಎಲ್.ಎನ್. ಉಪಾಧ್ಯಾಯ.
೯೩. ಹೋಮಿಯೋಪಥಿ ಚಿಕಿತ್ಸಾಸಾರ ಶ್ರೀ| ಬೋಳೂರು ಎಸ್. ರಾವ್.
೯೪. ಯಕ್ಷಗಾನ ನಾಟಕದ ಪರಂಪರೆ ಮತ್ತು ಕೃತಿಗಳು ಶ್ರೀ| ಮಂಜುನಾಥ ಭಾಗವತ.
೯೫. ಪುನರುಜ್ಜೀವನ (ಏಕಾಂಕ ನಾಟಕ) ಶ್ರೀ| ಗೋವಿಂದ ಭಟ್ಟ, ಶೇಡಿಗುಮ್ಮೆ.
೯೬. ಪ್ರಥಮ ಚಿಕಿತ್ಸೆಯ ಕೈಪಿಡಿ ಶ್ರೀ| ಬೋಳೂರು ಎಸ್. ರಾವ್.
೯೭. ಹಸ್ತರೇಖಾ ವಿಜ್ಞಾನ ಡಾ| ಕೆ. ಕೆ. ಕಲ್ಕೂರ್.
೯೮. ಸ್ವಾತಂತ್ರ್ಯ (ಏಕಾಂಕ ನಾಟಕ) ಶ್ರೀ| ಕೆ. ಎನ್. ಭಟ್, ಶಿರಾಡಿಪಾಲ್.
೯೯. ಭಾರತೀಯ ಸ್ವಾತಂತ್ರ್ಯಸಂಗ್ರಾಮ ಶ್ರೀ| ಎಮ್. ರಘುನಂದನ ರಾವ್.
೧೦೦. ಭಕ್ತ ಕುಚೇಲ (ಏಕಾಂಕ ಸಂಗೀತ ನಾಟಕ) ಶ್ರೀ| ಅಂಬಾತನಯ.

| | |
|---|---|
| ೩೧. ಕಾರ್ಕಳದ ಚರಿತ್ರೆ | ಶ್ರೀ। ಡಿ. ಪುಟ್ಟಸ್ವಾಮಿ, ಎಡ್ವೊಕೇಟ್. |
| ೩೨. ಮರ್ಜಿ [ಏಕಾಂಕ ಪ್ರಹಸನ] | ದಿ। ಎಂ. ಎಸ್. ಕಾಮತ್. |
| ೩೩. ದರ್ಶನದ ಕಥೆಗಳು | ಶ್ರೀ। ಬಿ ಶಂಕರ ಭಟ್ಟ ಮತ್ತು ಶ್ರೀ। ಬಿ.ಎಂ.ಶರ್ಮಾ. |
| ೩೪. ಅಳುವಿನ ಹೊಳೆ ಮತ್ತು ಕೇಶವಭೂಪ [ಮಕ್ಕಳ ಕಥೆಗಳು] | "ನವಗಿರಿನಂದ." |
| ೩೫. ಶರಾಬಿನ ಪೀಪಾಯಿಗಳು | ಶ್ರೀ। ಬಳ್ಳೂರು ಸುಬ್ರಾಯ ಅಡಿಗ. |
| ೩೬. ಗುಮಾನಿಕವಿಯ ಉಪದೇಶ ಶತಕ | ಶ್ರೀ। ಅಮ್ಮೆಂಬಳ ಅನಂತಯ್ಯ ನಾವಡ. |
| ೩೭. ‡ನಿಮಗೆ ಗೊತ್ತಿದೆಯೇ? | ಶ್ರೀ। ಟಿ. ಚಂದ್ರರಾಜ ಸೆಟ್ಟಿ. |
| ೩೮. ಚತುರ ಚಮತ್ಕಾರ | ಡಾ। ಎಸ್. ಪಿ. ಭಟ್. |
| ೩೯. ಸತೀ ಸಾವಿತ್ರಿ [ಏಕಾಂಕ ನಾಟಕ] | ಶ್ರೀ। ಪಿ. ವೆಂಕಟರಮಣ ಭಟ್ಟ. |
| ೪೦. ಆಭರಣಗಳ ಪೆಟ್ಟಿಗೆ ಮತ್ತು ಇತರ ಕಥೆಗಳು. | ಶ್ರೀ। ಬಳ್ಳೂರು ಸುಬ್ರಾಯ ಅಡಿಗ. |
| ೪೧. ‡ಭಾರತದ ಮಂತ್ರಿಮಂಡಲಗಳು. (ದ್ವಿತೀಯ ಮುದ್ರಣ.) | |
| ೪೨. ಕಾಲುಬಳೆಯ ಕತೆ | ಶ್ರೀಮತಿ ಬಿ. ಎಸ್. ರತ್ನಮ್ಮ. |
| ೪೩. ಭಾರತದ ನಾಲ್ಕು ಕಲಶಗಳು | ಶ್ರೀ। ಟಿ. ಚಂದ್ರರಾಜ ಸೆಟ್ಟಿ. |
| ೪೪. ವ್ಯಸನದಿಂದ ಲಾಭ ಮತ್ತು ಇತರ ಕಥೆಗಳು | ಶ್ರೀ। ಎಲ್. ಎಸ್. ನಾಯಕ. |
| ೪೫. ಸುಭಾಷಿತ (ನೀತಿವಚನಗಳು) [ದ್ವಿ. ಮು.] | ಶ್ರೀ। ಎಂ. ಸುಬ್ರಾಯನ್, ವಿದ್ವಾನ್. |
| ೪೬. ೧೮೫೭ರ "ಸಿಪಾಯಿದಂಗೆ" | ಶ್ರೀ। ಸುಭಾಷ್ಚಂದ್ರ ಶೆಣೈ, ಬದಿಯಡ್ಕ. |
| ೪೭. ಅಕಾಂಡತಾಂಡವ (ರೇಡಿಯೋ ನಾಟಕ) | ಶ್ರೀ। ಬಿ. ದಾಮೋದರ ಬಾಳಿಗ, ಬಿ.ಎ. |
| ೪೮. ಸಾಹಸದ ಕಥೆಗಳು | ಶ್ರೀ। ಕುಡ್ಪಿ ವಾಸುದೇವ ಶೆಣೈ. |
| ೪೯. ಸಂಜ್ಞಾ ಜ್ಞಾನಕೋಶ (ಪ್ರಥಮ ಭಾಗ) | ಡಾ। ಎಸ್. ಪಿ. ಭಟ್. |
| ೫೦. ಪಂಡಿತನ ಪಿಟಲು | ಶ್ರೀ। ಕುಡ್ಪಿ ವಾಸುದೇವ ಶೆಣೈ. |
| ೫೧. ಭೋಗಯಾತ್ರೆ (ಆಚಾರ್ಯ ವಿನೋಬಾಭಾವೆ) | ಶ್ರೀ। ಎಲ್. ಎಸ್. ನಾಯಕ |
| ೫೨. ಸಂಗ್ರಾಮಸಿಂಹ (ಐತಿಹಾಸಿಕ ಕಥನ) | ಶ್ರೀ। ಅ. ಗೌ. ಕಿನ್ನಿಗೋಳಿ ವಿದ್ವಾನ್. |
| ೫೩. ಧರ್ಮ ಶಿಕ್ಷಾ | ಶ್ರೀ। ಕೋ. ಶ. ಕಾಂತ, ಬಿ.ಎ., ಬಿ.ಎಲ್., ಎಡ್ವೊಕೇಟ್. |
| ೫೪. ಮಹಾತ್ಮ (ಪೂಜ್ಯ ಬಾಪೂಜಿ) | ಶ್ರೀ। ಎಲ್. ಎಸ್. ನಾಯಕ್. |
| ೫೫. ಮೀರಾಬಾಯಿ (ಏಕಾಂಕ ನಾಟಕ) | ಶ್ರೀ। ಸಂ. ಜ. ರಾವ್. |
| ೫೬. ವೀರರಮಣಿ ಕರ್ಮದೇವಿ | ಶ್ರೀ। ಕೆ. ಎಸ್. ಶರ್ಮಾ, ವಿದ್ವಾನ್. |
| ೫೭. ಅರಳಿದ ನಗು | ಶ್ರೀ। ಬಳ್ಳೂರು ಸುಬ್ರಾಯ ಅಡಿಗ, ವಿದ್ವಾನ್. |
| ೫೮. ಸಚಿತ್ರ ಜಪಾನ್ | ಶ್ರೀ। ಟಿ. ರಮೇಶ ಪೈ. |
| ೫೯. ಚುಟ್ಟಬಿಟ್ಟದಿಟ್ಟ | ಡಾ। ಎಸ್. ಪಿ. ಭಟ್. |
| ೬೦. ನಿರಪರಾಧಿ | ಶ್ರೀ। ಎಲ್. ಎಸ್. ನಾಯಕ್. |
| ೬೧. ಭಕ್ತವಾಣಿ | ರಾಷ್ಟ್ರಕವಿ ಮಂಜೇಶ್ವರ ಗೋವಿಂದ ಪೈ. |
| ೬೨. ಜಾನಪದ ಸಾಹಿತ್ಯ | ಶ್ರೀ। ಪಡಾರು ಮಹಾಬಲೇಶ್ವರ ಭಟ್. |
| ೬೩. ಡಾಕ್ಟರ್ ಆರೋಗ್ಯಮ್ | ಶ್ರೀ। ಕೆ. ಎನ್. ಭಟ್, ಶಿರಾಡಿಪಾಲ್. |
| ೬೪. ಲೌಕಿಕ ನ್ಯಾಯಗಳು | ಶ್ರೀ। ಕೆ. ಎಲ್. ಎಸ್. ಉಪಾಧ್ಯಾಯ. |
| ೬೫. ‡ಶಿಶುಪಾಲ ಮಾನಭಂಗ | ಶ್ರೀ। ಕೆ. ಸುಭಾಷಚಂದ್ರ ಶೆಣೈ, ಬದಿಯಡ್ಕ. |

೧೦೧. ಉತ್ತರನ ಪೌರುಷ (ಯಕ್ಷಗಾನ) ಶ್ರೀ। ಪುಟ್ಟಣ್ಣ.
೧೦೨. ಕುಮಾರ (ವಿನೋದ ಕಥೆ) ಶ್ರೀ। ಕುಡ್ಪಿ ವಾಸುದೇವ ಶೆಣೈ.
೧೦೩. ಕೇರಳ ಜ್ಯೋತಿಷ (ಪ್ರಮುಖ ಯೋಗಗಳು) ವೈದ್ಯಗುರು ಎಂ. ಆರ್. ಭಟ್.
೧೦೪. ಒಗಟುಗಳ ಗೊಂಚಲು (ಒಗಟುಗಳು ಭಾಗ ೩) ಡಾ। ಎಸ್. ಪಿ. ಭಟ್.
೧೦೫. ಊರ-ಔಷಧಿಗಳು ಶ್ರೀ। ಬೋಳೂರು ಎಸ್. ರಾವ್.
೧೦೬. ಮದ್ವೆ ಅವಾಂತರ (ಏಕಾಂಕ ಪ್ರಹಸನ) "ಅಷ್ಟಾವಕ್ರ".
೧೦೭. ಜಗತ್ತಿನ ವಿಜ್ಞಾನಿಗಳು ಶ್ರೀ। ಟಿ. ಚಂದ್ರರಾಜ ಸೆಟ್ಟಿ.
೧೦೮. ನಮ್ಮ ದೇಶ ಶ್ರೀ। ಕುಡ್ಪಿ ವಾಸುದೇವ ಶೆಣೈ.
೧೦೯. ಗ್ರಾಮ ಸ್ವಾತಂತ್ರ್ಯ ಶ್ರೀ। ಎ. ವಿ. ಮಯ್ಯ.
೧೧೦. ನಮ್ಮ ಕನ್ನಡ ನಾಡು ಶ್ರೀ। ಕುಡ್ಪಿ ವಾಸುದೇವ ಶೆಣೈ.
೧೧೧. ಭಕ್ತ ಧ್ರುವ (ಏಕಾಂಕ ನಾಟಕ) ಶ್ರೀ। ಸುಬ್ರಾಯ, ಅನಂತಪುರ.
೧೧೨. ಕರ್ನಾಟಕ ಕವಿಚರಿತ್ರೆ ಶ್ರೀ। ಬಿ. ಈಶ್ವರಯ್ಯ.
೧೧೩. ಬೇಡನ ಮಗಳು (ಏಕಾಂಕ ನಾಟಕ) ಶ್ರೀ। ವೆಂಕಟರಾಜ ಪುಣಿಂಚತ್ತಾಯ.
೧೧೪. ಸ್ವಾಮಿ ವಿವೇಕಾನಂದ ಶ್ರೀ। ಎಂ. ಕೃಷ್ಣರಾವ್, ಬಿ. ಎ.,
೧೧೫. ನಮ್ಮ ಆಹಾರ ಶ್ರೀ। ಕೆ ಸಿ. ವೈದ್ಯರ್.
೧೧೬. ಗಾದೆಗಳೂ ಜ್ಞಾನೋಕ್ತಿಗಳೂ ಶ್ರೀಮತಿ ಬೇಬಿ ಸರೋಜಿನಿ.
೧೧೭. ಪುರಂದರದಾಸರು [ಏಕಾಂಕ ನಾಟಕ] ಶ್ರೀ। ಪದ್ಮನಾಭ ಸೋಮಯಾಜಿ.
೧೧೮. ಮನುಷ್ಯಯಜ್ಞ ಶ್ರೀ। ಬಿ. ಶಂಕರ ಭಟ್ಟ.
೧೧೯. ಹೆಮ್ಮಕ್ಕಳ ಹಾಡುಗಳು ಶ್ರೀ। ಪಡಾರು ಮಹಾಬಲೇಶ್ವರ ಭಟ್.
೧೨೦. ನಮ್ಮ ಹಬ್ಬಗಳು ಶ್ರೀ। ಶ್ಯಾಮ್, ಪುತ್ತೂರು.
೧೨೧. ವೀರಾಗ್ರಣಿ ಕರ್ಣ (ಏಕಾಂಕ ನಾಟಕ) ಶ್ರೀ। ಅಮ್ಮೆಂಬಳ ಅನಂತಯ್ಯ, ನಾವಡ.
೧೨೨. ಸೂರ್ಯನೇ ನನಗೆ ಸಾಕ್ಷಿ ಮತ್ತು ಇತರ ಕಥೆಗಳು ಶ್ರೀ। ಎನ್. ಎಸ್. ನವಕಾನ.
೧೨೩. ನವ ಕೈಲಾಸ (ಯಕ್ಷಗಾನ) ಶ್ರೀ। ಮಾಳಕೋಡ ನಾರಾಯಣ.
೧೨೪. ಕುಶ-ಲವ (ಏಕಾಂಕ ಪೌರಾಣಿಕ ನಾಟಕ) ಶ್ರೀ। ಬಿ. ಈಶ್ವರಯ್ಯ.
೧೨೫. ಅಮರನಾಥ ಯಾತ್ರೆ ಶ್ರೀ। ಗುಂಡ್ಮಿ ಮಹಾಬಲ ಭಟ್ಟ.
೧೨೬. ಸಂಜ್ಞಾ ಪ್ರಾಧ್ಯಾಪಕ ಮತ್ತು ಇತರ ಕಥೆಗಳು. ಶ್ರೀ। ಎಂ. ಕೃಷ್ಣರಾವ್, ಬಿ. ಎ.
೧೨೭. ದ್ವಾರಕಾ ಶ್ರೀ। ಗುಂಡ್ಮಿ ಮಹಾಬಲ ಭಟ್.
೧೨೮. ಭಾರತದ ಸಂಗೀತ ಜ್ಯೋತಿಗಳು ಶ್ರೀ। ಎಚ್. ಸುಂದರರಾಮರಾವ್.
೧೨೯. ಮಕ್ಕಳ ಪದ್ಯಗಳು ಶ್ರೀ। ಅಮ್ಮೆಂಬಳ ಅನಂತಯ್ಯ ನಾವಡ, ವಿದ್ವಾನ್.
೧೩೦. ನಯೆ ಪೈಸೆ
೧೩೧. ತಾಯಿಗಾಗಿ ಮತ್ತು ಇತರ ಕಥೆಗಳು ಶ್ರೀ। ಬಿ. ಶಂಕರಭಟ್, ವಿದ್ವಾನ್.
೧೩೨. ಸಂತ ಮೀರಾಬಾಯಿಯ ಭಜನಾ ಗೀತಗಳು. ಶ್ರೀ। ಎಚ್. ಸುಂದರರಾಮರಾವ್.
೧೩೩. ಅಕ್ಷಯಪಾತ್ರೆ ಶ್ರೀ। ಟಿ. ಚಂದ್ರರಾಜ ಸೆಟ್ಟಿ, ಸಿದ್ಧಕಟ್ಟೆ.
೧೩೪. ಉ. ಕ. ದ ಯಕ್ಷಗಾನ ಮಂಡಲಿಗಳು ಶ್ರೀ। ಮಾಳಕೋಡ ನಾರಾಯಣ.

Edited, Printed & Published by K. V. Shenoy
at The Prabhat Printers, Ltd., Mangalore.